# ೧೮೫೧ರಲ್ಲಿ ಲಂಡನ್ನಿನಲ್ಲಿ ನಡೆದ ಬೃಹತ್ ವಸ್ತು ಪ್ರದರ್ಶನ

ನೇಮುಗಲ್ ಸೋಮಶೇಖರ

ಲಾಲ್‌ಬಾಗ್‌ನ ಗಾಜಿನ ಮನೆಗೆ ನೂರು ವರ್ಷ ಕಳೆದಿದೆ. ಈ ಗಾಜಿನ ಮನೆಯನ್ನು ನಿರ್ಮಿಸಿದ್ದು ಆಗ ಲಂಡನ್ನಿನಲ್ಲಿದ್ದ ಕ್ರಿಸ್ಟಲ್ ಪ್ಯಾಲೆಸ್ ಮಾದರಿಯಲ್ಲಿ.: ಕ್ರಿಸ್ಟಲ್ ಪ್ಯಾಲೆಸ್ ಒಂದು ಅರಮನೆಯಲ್ಲ, ಲಂಡನ್ನಿನಲ್ಲಿ ೧೮೫೧ರಲ್ಲಿ ನಡೆದ ವಸ್ತು ಪ್ರದರ್ಶನದ ಬೃಹತ್ ಭವನ. ಆ ಪ್ರದರ್ಶನದ ಕಟ್ಟಡವನ್ನು ಪ್ಯಾಲೆಸ್ ಮಾದರಿಯಲ್ಲಿ ನಿರ್ಮಿಸಬೇಕಾದರೆ ಆ ವಸ್ತು ಪ್ರದರ್ಶನ ಯಾವ ರೀತಿಯಲ್ಲಿ ನಡೆದಿರಬೇಕೆಂದು ಅವಲೋಕಿಸಿದರೆ ಆಶ್ಚರ್ಯವಾಗುತ್ತದೆ.

ವಿಶ್ವದಲ್ಲಿಯೇ ಮೊಟ್ಟಮೊದಲನೆಯ ಬಾರಿ ನಡೆದಂತಹ ಬೃಹತ್ ವಸ್ತು ಪ್ರದರ್ಶನ ನಡೆದದ್ದು ೧೪೧ ದಿವಸ; ಆವರಿಸಿದ ಜಾಗ ಇಪ್ಪತ್ತೊಂರು ಎಕರೆ. ಸುಮಾರು ಆರು ತಿಂಗಳು ಕಟ್ಟಡವನ್ನು ನಿರ್ಮಿಸಲು ದಿನವಹಿ ಎರಡು ಸಾವಿರ ಜನರು ಕೆಲಸ ಮಾಡಿದರು. ಕಟ್ಟಡವನ್ನು ಕಬ್ಬಿಣದ ಕಂಬಗಳು ಮತ್ತು ಇತರೆ ವಸ್ತುಗಳಿಂದ ಪ್ರದರ್ಶನ ನಡೆದ ನಂತರ ತೆಗೆಯುವಂತಹ ರೀತಿಯಲ್ಲಿ ನಿರ್ಮಿಸಿದರು. ಮಿಕ್ಕಭಾಗವೆಲ್ಲಾ ಪೂರ್ತ ಗಾಜಿನಿಂದ ಕೂಡಿತ್ತು. ಈ ಭವನದ ನಕ್ಷೆಯನ್ನು ಜೋಸೆಫ್ ಫಾಕ್ಸಟನ್ ಎಂಬ ಪ್ರಸಿದ್ಧ ಇಂಜಿನಿಯರ್ ರೂಪಿಸಿದ್ದರಿಂದ ಮತ್ತು ದೂರದಿಂದ ಭವನವನ್ನು ನೋಡಿದರೆ ಗಾಜುಗಳು ಹೊಳೆಯುತ್ತಿದ್ದರಿಂದ 'ಜೋಸೆಫ್ ಫಾಕ್ಸಟನ್ ಕ್ರಿಸ್ಟಲ್ ಪ್ಯಾಲೆಸ್' ಎಂದು ಲಂಡನ್ನಿನ ಸ್ಥಳೀಯ ಜನರು ಕರೆದರು. ಲಂಡನ್ನಿನ ಸ್ಥಳವಾದ ಹೈಡ್ ಪಾರ್ಕಿನಲ್ಲಿ, ಅಗಲ ೫೦೦ ಅಡಿ, ಉದ್ದ ೨,೩೦೦ ಅಡಿ ಆವರಣದಲ್ಲಿ (ಮಧ್ಯದ ಗಾಜಿನ ಗುಮ್ಮಟದ ಎತ್ತರ ೬೮ ಅಡಿ) ಭವನವನ್ನು ನಿರ್ಮಿಸಿದರು. ಈ ಪ್ರದರ್ಶನ ಬೃಹತ್ ಪ್ರಮಾಣದಲ್ಲಿ ಇದ್ದ ಕಾರಣದಿಂದಾಗಿ 'ಲಂಡನ್ ಗ್ರೇಟ್ ಎಕ್ಸಿಬಿಷನ್' ಎಂದೆನಿಸಿಕೊಂಡಿತು. ಆದರೆ ಇಟ್ಟಿದ್ದ ಹೆಸರು 'ಗ್ರೇಟ್ ಎಕ್ಸಿಬಿಷನ್ ಆಫ್ ದಿ ವರ್ಕ್ಸ್ ಆಫ್ ಇಂಡಸ್ಟ್ರೀಸ್ ಆಫ್ ದಿ ನೇಷನ್ಸ್ ೧೮೫೧' ಎಂದು.

೧೮೫೧, ಮೇ ಒಂದರಂದು ಪ್ರದರ್ಶನವನ್ನು ವಿಕ್ಟೋರಿಯಾ ರಾಣಿ ಮತ್ತು ರಾಜಕುಮಾರ ಆಲ್ಬರ್ಟ್ ವಿಕ್ಟರ್ ಅವರು ವಿಧಿವತ್ತಾಗಿ ಪ್ರಾರಂಭಿಸಿದರು. ನಡೆದ ಮೂರು ತಿಂಗಳು ದಿನವೂ ತಪ್ಪದೆ ವಿಕ್ಟೋರಿಯಾ ರಾಣಿ ಭೇಟಿ ಕೊಡುತ್ತಿದ್ದರು. ವಿಶ್ವದ ಮೂಲೆ ಮೂಲೆಗಳಿಂದಲೂ ವಸ್ತುಗಳು ಹೋಗಿ ಪ್ರದರ್ಶಿತವಾಗಿತ್ತು. ಈ ಪ್ರದರ್ಶನ ವಿಶ್ವದ ಇತಿಹಾಸದಲ್ಲೇ ಒಂದು ಮೈಲಿಗಲ್ಲನ್ನು ನಿರ್ಮಿಸಿತು. ಒಟ್ಟು ಭೇಟಿ ಕೊಟ್ಟ ಜನ ೬೦ ಲಕ್ಷ ೬೦ ಸಾವಿರ. ಒಂದೇ ದಿವಸದಲ್ಲಿ ಒಂದು ಲಕ್ಷ ಹತ್ತು ಸಾವಿರ ಜನ ಭೇಟಿ ಕೊಟ್ಟದ್ದು ದಾಖಲೆಯಾಗಿರುತ್ತದೆ. ಗಂಡಸರಿಗಿಂತ ಹೆಂಗಸರಿಗೆ ಪ್ರವೇಶ ದರ ಕಮ್ಮಿ ಇತ್ತು. ಸಾಯಂಕಾಲವಾದೊಡನೆ ಪ್ರದರ್ಶನವು ಕೊನೆಗೊಳ್ಳುತ್ತಿತ್ತು. ಭಾನುವಾರ ವಾರದ ರಜ ಆಗಿತ್ತು. ಭಾರತದ ಮೇಲೆ ಈ ಪ್ರದರ್ಶನದಿಂದ ಆದ ಪರಿಣಾಮ ಅಪೋಘವಾದದ್ದೆ.

ಮೈಸೂರು ಸಂಸ್ಥಾನದಿಂದ ಈ ಪ್ರದರ್ಶನಕ್ಕೆ ಹೋಗಿ ಪ್ರದರ್ಶಿತವಾದ ವಸ್ತುಗಳು ಭೂ ಖನಿಜ ಸಂಪತ್ತು, ಕೈಗಾರಿಕಾ ಸಂಪತ್ತು, ಆಹಾರ ದಿನಸಿ, ರೇಷ್ಮೆ, ಗಂಧದ ಎಣ್ಣೆ, ಬಟ್ಟೆ ಇನ್ನೂ ಕೆಲವು ವಸ್ತುಗಳು. ದಕ್ಷಿಣ ಭಾರತದಿಂದ ಈ ಪ್ರದರ್ಶನಕ್ಕೆ ಕಳುಹಿಸಿಕೊಡುವ

ವಸ್ತುಗಳಿಗೋಸ್ಕರ ಒಂದು ಸಮಿತಿಯನ್ನು ನೇಮಿಸಿದ್ದರು. ಆ ಸಮಿತಿಗೆ ಆಗ ಮದರಾಸಿನಲ್ಲಿದ್ದ ಹಿರಿಯ ಸಂಶೋಧಕರಾಗಿದ್ದ ಡಾ॥ ಎಡ್ವರ್ಡ್ ಗ್ರೀನ್ ಬೆಲ್‌ಫ್ಲೂರ್ ಅವರನ್ನು ಮುಖ್ಯ ಕಾರ್ಯದರ್ಶಿಯನ್ನಾಗಿ ನೇಮಿಸಿದ್ದರು. ಮೈಸೂರು ಸಂಸ್ಥಾನದಿಂದ ಕಳುಹಿಸಿ ಕೊಡಲ್ಪಡುವ ವಸ್ತುಗಳ ಉಸ್ತುವಾರಿಯನ್ನು ಮೈಸೂರು ಕಮೀಷನರ್ ಅವರೇ ವಹಿಸಿಕೊಂಡಿದ್ದರು.

ಈ ಪ್ರದರ್ಶನ ನಡೆದ ಪರಿಣಾಮವಾಗಿ ಮದರಾಸಿನ ವಸ್ತು ಸಂಗ್ರಹಾಲಯವನ್ನು ೧೮೫೧ ರಲ್ಲಿ ಇ.ಜಿ. ಬೆಲ್‌ಫ್ಲೂರ್ ಅವರು ಸ್ಥಾಪಿಸಿದರು. ಈ ಬೆಲ್‌ಫ್ಲೋರ್ ಅವರೇ ೧೮೬೫ರಲ್ಲಿ ಬೆಂಗಳೂರಿನ ವಸ್ತು ಸಂಗ್ರಹಾಲಯವನ್ನು ಸ್ಥಾಪಿಸಿದರು. ಬೊಂಬಾಯಿಯಲ್ಲಿನ ವಿಕ್ಟೋರಿಯಾ ಆಲ್ಬರ್ಟ್ ವಸ್ತುಸಂಗ್ರಹಾಲಯ ಪ್ರಾರಂಭವಾಗುವುದಕ್ಕೂ ಈ ಪ್ರದರ್ಶನವೇ ಕಾರಣವಾಯಿತು.

ಈ ಪ್ರದರ್ಶನ ನಡೆದನಂತರ ಲಂಡನ್ನಿನಲ್ಲೇ ಅಂಥದ್ದು ಹತ್ತು ವರ್ಷಗಳಿಗೊಮ್ಮೆ ಮತ್ತು ಪ್ಯಾರಿಸ್ಸಿನಲ್ಲಿ ಐದು ವರ್ಷಗಳಿಗೊಮ್ಮೆ ನಡೆಯಿತು. ನಂತರ ವಿಶ್ವದ ಮೂಲೆ ಮೂಲೆಗಳಲ್ಲಿಯೂ ನಡೆಯಲು ಪ್ರಾರಂಭವಾಯಿತು. ಕಲ್ಕತ್ತದಲ್ಲಿ ೧೮೮೩ರಲ್ಲಿ ಒಂದು ವಸ್ತು ಪ್ರದರ್ಶನವು ನಡೆಯಿತು. ೧೮೮೮ರಲ್ಲಿ ಮೈಸೂರಿನಲ್ಲಿ ಮೊಟ್ಟ ಮೊದಲನೆಯದಾಗಿ ದಸರಾ ವಸ್ತು ಪ್ರದರ್ಶನ ನಡೆಯಿತು. ಇದಕ್ಕೆಲ್ಲಾ ೧೮೫೧ರಲ್ಲಿ ಲಂಡನ್ನಿನಲ್ಲಿ ನಡೆದ ವಸ್ತು ಪ್ರದರ್ಶನವೇ ನಾಂದಿಯಾಯಿತು.

ಈ ಪ್ರದರ್ಶನ ನಡೆದನಂತರ ಸದರೀ ಕಟ್ಟಡವನ್ನು ಹೊರತೆಗೆದು ೧೮೫೪ರಲ್ಲಿ ಲಂಡನ್ನಿನಲ್ಲೇ ಇರುವ ಸಿಡನ್ಹ್ಯಾಮ್ ಬೆಟ್ಟದ ಮೇಲೆ ಶಾಶ್ವತವಾಗಿ ಇನ್ನೂ ಆಕರ್ಷಕವಾಗಿ ನಿರ್ಮಿಸಿ ಸುತ್ತಮುತ್ತಲಿನ ಸ್ಥಳವನ್ನು ಪ್ರವಾಸಿ, ಕೇಂದ್ರವನ್ನಾಗಿ ಮಾರ್ಪಾಟು ಮಾಡಿದರು. ಲಂಡನ್ನಿನ ಜನರು ಶಾಶ್ವತವಾಗಿ ಈ ಭವನವನ್ನು "ಕ್ರಿಸ್ಟಲ್ ಪ್ಯಾಲೆಸ್" ಎಂದು ಕರೆದರು. ಆದರೆ ದುರದೃಷ್ಟವಶಾತ್ ೧೯೩೬ರಲ್ಲಿ ಈ ಕ್ರಿಸ್ಟಲ್ ಪ್ಯಾಲೆಸ್ ಬೆಂಕಿ ಅನಾಹುತದಿಂದ ಸುಟ್ಟು ನೆಲಸಮವಾಯಿತು. ಕ್ರಿಸ್ಟಲ್ ಪ್ಯಾಲೆಸ್ ಈಗ ಲಂಡನ್ನಿನಲ್ಲಿ ಇಲ್ಲದೆ ಹೋದರೂ ಆ ಪ್ಯಾಲೆಸ್ ಮಾದರಿಯಲ್ಲಿ ೧೮೯೦ರಲ್ಲಿ ನಿರ್ಮಿಸಿದ ಬೆಂಗಳೂರಿನ ಲಾಲ್‌ಬಾಗ್ ಗಾಜಿನ ಮನೆ ಕಂಗೊಳಿಸುತ್ತಿದೆ. ○